# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಬಸವರಾಜ ಪಾಟೀಲ್ ಇಟಗಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **397** |
| ಉತ್ತರಿಸಬೇಕಾದ ದಿನಾಂಕ | : | 15.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಆಶ್ರಯ, ಅಂಬೇಡ್ಕರ್, ಬಸವ ಹಾಗೂ ಇತರೆ ಯೋಜನೆಗಳು, ರಾಜೀವ್ ಗಾಂಧಿ ವಸತಿ ನಿಗಮದಲ್ಲಿ ಸ್ಥಗಿತಗೊಂಡಿದ್ದು, ಬಡ ಫಲಾನುಭವಿಗಳಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯಾ ; | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಇಂದಿರಾ ಮನೆ ಆ್ಯಪ್ ನ ಮುಖಾಂತರ ಜಿ.ಪಿ.ಎಸ್ ಮಾಡಲಾದ ಮನೆಗಳ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು, ಆದರೆ, ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಅನರ್ಹ ಫಲಾನುಭವಿಗಳ ಆಯ್ಕೆ ಕಂಡು ಬಂದಿರುವುದರಿಂದ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 154 ಹೆಚ್‌ಎಎಂ 2019, ದಿನಾಂಕ:16.11.2019 ರ ರೀತ್ಯಾ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಜಿ.ಪಿ.ಎಸ್ ಗೆ ಅಳವಡಿಸಿ, ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ದೃಢೀಕರಿಸಿದ ನಂತರ ಸದರಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ಮುಂದುವರೆದಂತೆ ವಿವಿಧ ವಸತಿ ಯೋಜನೆಗಳಡಿ ಪ್ರಗತಿಯಲ್ಲಿರುವ ಮನೆಗಳ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಾಗ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಎಂಬ ಎರಡು |

| | | |
|---|---|---|
| | | ಪರಿಶೀಲನಾ ವಿಧಾನಗಳ ಮೂಲಕ ಅನುದಾನ ಬಿಡುಗಡೆ ಆಗುತ್ತಿದ್ದು, ಇದರಿಂದ ಆಗುವ ವಿಳಂಬವನ್ನು ತಪ್ಪಿಸಲು ಮೇಲ್ಕಂಡ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಅನ್ನು ಒಗ್ಗೂಡಿಸಿ, ಇಂದಿರಾ ವಿಜಿಲ್ ಆಪ್ ಎಂಬ ನೂತನ ತಂತ್ರಾಂಶವನ್ನು ಅಳವಡಿಸಲಾಗಿದ್ದು, ಫಲಾನುಭವಿಗಳಿಗೆ ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗಿದೆ. |
| (ಆ) | ಬಂದಿದ್ದಲ್ಲಿ ಸರ್ಕಾರ ಕೈಗೊಂಡಿ ಕ್ರಮವೇನು ? (ವಿವರ ನೀಡುವುದು) | ಪ್ರಸ್ತುತ ಸಾಲಿನ ಅಗಸ್ಟ್-21ರ ಅಂತ್ಯದವರೆಗೆ ವಿವಿಧ ವಸತಿ ಯೋಜನೆಯಡಿ ರಾಯಚೂರು ಜಿಲ್ಲೆಗೆ ರೂ.1852.92 ಲಕ್ಷಗಳು ಹಾಗೂ ಕೊಪ್ಪಳ ಜಿಲ್ಲೆಗೆ ರೂ.1931.52 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ :ವಇ 202 ಹೆಚ್‌ಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು